# ಭೀಮಸೇನ ಬೇಬಿ





ಬಿ. ಸದಾಶಿವಯ್ಯ

"ಮಾತೃದೇವೋಭವ । ಪಿತೃದೇವೋಭವ"

—ತೈತ್ತರೀಯ.

# ಮೊದಲ ಮಾತು.

ಮಾನವ ಸಮಾಜದಲ್ಲಿ ಶತಮಾನಗಳ ಶ್ರದ್ಧಾವಂತ ಜೀವನದಿಂದ ಸಾರ್ವಜನಿಕ ಸುಖಕ್ಕೆ ತಳಪಾಯವೆಂದು ಧೃಡವಾಗಿ ಆಚರಿಸಲ್ಪಟ್ಟು ಬರುತ್ತಿದ್ದ ಪ್ರೇಮ, ವಿಶ್ವಾಸ, ಕೃತಜ್ಞತೆ, ದಯಾಧರ್ಮಗಳ ಸೂತ್ರಗಳೆಲ್ಲವೂ ವಿಪರೀತ ಬುದ್ಧಿಯ ಕುತರ್ಕದ ಸುಂಟರಗಾಳಿಗೆ ಸಿಕ್ಕಿ, ಪ್ರತಿಯೊಂದು ಸಹಜ ಧರ್ಮಸೂತ್ರವೂ ಸಹ ಬೆಟ್ಟದಂಥ ಅರ್ಥಹೀನ ಪ್ರಶ್ನಾರ್ಥಕಚಿಹ್ನೆಗೆ ಬಲಿಯಾಗಿರುವ ಇಂದು ಶ್ರೇಯಾಭಿಲಾಷಿಯಾದ ಮಾನವನು ತನ್ನ ನಿಜತ್ವವನ್ನು ಶಾಂತಚಿತ್ತನಾಗಿ ಕ್ಷಣಕಾಲವಾದರೂ ಕುಳಿತು ಕಂಡುಕೊಳ್ಳಬೇಕಾಗಿದೆ. ಈ ಕಾರ್ಯಕ್ಕೆ ಈ ಪುಟ್ಟ ದೃಶ್ಯವು ರವೆಯಷ್ಟಾದರೂ ಸಹಾಯವಾದರೆ ಸಾಕು.

ಚಿ. ಸದಾಶಿವಯ್ಯ



ಬಿ. ಎಸ್. ಐಯ್ಯಂಗಾರ್, ಪ್ರಿಂಟರ್, ಬೆಂಗಳೂರು ಸಿಟಿ.

೧೫-೩-೧೯೪೫ನೇ ಉಗಾದಿಯ ಉತ್ಸವದಂದು
ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಕನ್ನಡ ರಂಗಮಂದಿರದವರಿಂದ
ಮೊದಲ ಬಾರಿ ಅಭಿನಯಿಸಲ್ಪಟ್ಟಾಗ
ಭಾಗವಹಿಸಿದವರು

| ಪಾತ್ರಗಳು | | ನಟರು |
|---|---|---|
| ೧. ಭೀಮಸೇನ-ಬೇಬಿ | .... | ಶ್ರೀ ಪಿ. ಆರ್. ಶ್ರೀಕಂಠಯ್ಯ |
| ೨. ಜಾನಕಮ್ಮ | .... | ,, ಸಿ. ಎಲ್. ಪುರುಷೋತ್ತಮ ರಾವ್, ಬಿ.ಎ. (ಆನರ್ಸ್) |
| ೩. ಗುರುಪಾದ | .... | ,, ಸಿ. ಜಯವಿದ್ಯ, ಬಿ.ಎಸ್‌ಸಿ. |
| ೪. ಅಮೃತರಾವ್ | .... | ,, ಸಿ. ಎಲ್. ನಾರಾಯಣ್, ಬಿ. ಎಸ್‌ಸಿ. |

[ಮೊದಲು ಮುದ್ರಿತವಾದದ್ದು "ವಾಣಿ"ಯ ೧೯೪೪ನೇ
ಉಗಾದಿಯ ಸಂಚಿಕೆಯಲ್ಲಿ]

ಸಮಾಜದಲ್ಲಿನ

# “ ಗುರುಪಾದ ” ರಿಗೆ

ಗೌರವ ಕಾಣಿಕೆ.

# ಭೀಮಸೇನ-ಬೇಬಿ

[ಸಾಮಾಜಿಕ ದೃಶ್ಯ]

[ಭೀಮಸೇನರಾಯನ ಮನೆಯ ಕೈಸಾಲೆ. ಎಡಪಕ್ಕದಲ್ಲಿ ಒಂದು ಮೇಜೂ, ಸುತ್ತಾ ಮೂರು ಕುರ್ಚಿಗಳೂ ಇವೆ. ಬಲಪಕ್ಕದಲ್ಲಿ ಒಳಕ್ಕೆ ಹೋಗಲು ಬಾಗಿಲು – ಅರೆತೆರೆದಿದೆ. ಬಾಗಿಲ ಮೇಲ್ಭಾಗ ದಲ್ಲಿ ಸಾಲಾಗಿ ಲಕ್ಷ್ಮಿ, ವೆಂಕಟೇಶ ಮತ್ತು ಸರಸ್ವತಿಯರ ಪಠಗಳು ತೂಗು ಹಾಕಲ್ಪಟ್ಟಿವೆ. ಬೆಳಿಗ್ಗೆ ಒಂಭತ್ತು ಘಂಟೆಯ ಸಮಯ. ಐವತ್ತು ವರುಷದ ಭೀಮಸೇನರಾಯನು ಕೈಲಿ ಒಂದು ಹಗ್ಗವನ್ನು ಹಿಡಿದು ಮುಂದೆ ನಿಂತು ಕುಪ್ಪಳಿಸುವುದನ್ನು ಅಭ್ಯಸಿಸುತ್ತಿದಾನೆ.]

ಭೀಮಸೇನ :—(ತಪ್ಪಿ ಮುಗ್ಗರಿಸಿ, ಮಂಡಿ ಮುಟ್ಟಿ ಸುದಾರಿಸಿ ಕೊಂಡು) ಥೂ ! ಹಾಳು ಹಗ್ಗ ! ಸುಬ್ಬಸಾಮಿ ಹಗ್ಗ ಎಷ್ಟು ಚೆನ್ನಾಗಿತ್ತು. ಮುಗ್ಗರಿಸಿದರೂ ಪೆಟ್ಟಾಗುತಿರಲಿಲ್ಲ........ ನನ್ನನ್ನ ಅಣಕಿಸಿದಾನೆ ಅವನು. ಇರಲಿ ! ಇನ್ನೆಂಟು ದಿನದಲ್ಲೇ ಚೆನ್ನಾಗಿ ಕಲಿತು ಅವನಪ್ಪನೆದುರಿಗೇನೇ ಸ್ಕಿಪ್ಪಿಂಗ್ ಮಾಡಿ ಅವನನ್ನ ಸೋಲಿಸದೇ ಹೋದರೆ ನನ್ನ ಹೆಸರು ಭೀಮಸೇನ ಬೇಬಿ ಅಲ್ಲ. (ಮತ್ತೆ ಅಭ್ಯಸಿಸುವನು ; ತುಸುಹೊತ್ತಿನಲ್ಲಿ ಮತ್ತೆ ಮುಗ್ಗರಿಸಿ ಸೋತು, ಸಿಟ್ಟಾಗಿ, ಹಗ್ಗ ವನ್ನ ನೆಲಕ್ಕಪ್ಪಳಿಸಿ, ಕುರ್ಚಿಯಮೇಲೆ ಕುಳಿತು ವಿಶ್ರಮಿಸಿಕೊಳ್ಳು ವನು.)

ಭೀಮಸೇನ :—(ಇದ್ದಕ್ಕಿದ್ದಂತೆಯೇ ಕಣ್ಣು ಮಿಂಚಿ) ಹಾಂ ! ಹಾಂ! ಈಗರ್ಥವಾಯಿತು. ಬರೀ ಹೊಟ್ಟೆಯಲ್ಲಿ ಈ ಅಭ್ಯಾಸ

ಗಿಟ್ಟೊಲ್ಲ. ಚೆನ್ನಾಗಿ ತಯಾರಿ ತಗೋಬೇಕು ; ತಿಮ್ಮ ರಾಯಪ್ಪ ತಯಾರಿ ತಗೊಂಡೇ ಹಾಗಾದದ್ದು. (ಬಾಗಿಲ ಕಡೆಗೆ ತಿರುಗಿ ಒಲವು ತುಂಬಿದ ದನಿಯಲ್ಲಿ) ಜಾನಕ್! ಜಾನಕ್!! ಜಾನ್....(ದನಿಯನ್ನು ಎತ್ತರಿಸಿ)....ಜಾನೀ ೯ ೯ ೯ !

[ಒಳಗಿನಿಂದ ನಲವತ್ತು ವರುಷದ ಸೌಮ್ಯ ಮುಖದ ಜಾನಕಮ್ಮನು ಕೈಲಿ ಕಾಫಿ ತುಂಬಿದ ಲೋಟ ಹಿಡಿದು ಬರುವಳು]

ಜಾನಕಮ್ಮ :—ತಂದೇಂದ್ರೇ (ಮುಂದೆ ಬರುವಳು)

ಭೀಮಸೇನ :—ಏನದು ?

ಜಾನಕಿ :—ಕಾಫೀ !

ಭೀಮಸೇನ :—ಕಾಫಿಯಾದರೆ ನಾನು ಕುಡಿಯೊಲ್ಲ.

ಜಾನಕಿ :—ಮತ್ತೇ ?

ಭೀಮಸೇನ :—ಬಾದಾಮಿಹಲ್ವಾ, ಹಾಲುಖೋವಾ, ದೂದ್ ಪೇಡಾ, ಸಾಲಬ್‌ಮಿಸ್ರಿ ಮುರಬ್ಬ, ಬೆಣ್ಣೆ ಚಪಾತಿ, ಬಾದಾಮಿ ಹಾಲು....ಬರೀ ಇದರಲ್ಲೇ ಇರಬೇಕಾಗಿ ಬಂದು ಬಿಟ್ಟಿದೆ.

ಜಾನಕಿ :—(ಆಶ್ಚರ್ಯ ಸಂತಾಪದಿಂದ) ಮತ್ತಿದೇನು ಅವಾಂತ ರಾಂದ್ರೇ ?

ಭೀಮಸೇನ :—ನಂದೇನು ಅವಾಂತರವಿಲ್ಲ ಜಾನೀ. ನೆನ್ನೆ ಸಂಜೆ ಪುಟ್ಟೂರಾವ್ ಮನೇಗೆ ಹೋಗಿದ್ದೆ........

ಜಾನಕಿ :—ಅಲ್ಲಾಂದರೇ ! "ಅವರು ದುರಹಂಕಾರಿಗಳು, ನೀವು ಅವರ ಮನೆ ಹೊಸಲು ದಾಟಿದರೆ ನಾನಿಟ್ಟಾಣೆ.

ನಿಮ್ಮನ್ನ ಅವರು ಹಿಂದೆ ಎಷ್ಟು ಹಾಸ್ಯ ಮಾಡುತಾರೆ ! ಬೇಡಾ"ಂತಾ ನಾನೆಷ್ಟು ಬೇಡಿಕೊಂಡಿದ್ದರೂ, ನೀವು....

ಭೀಮಸೇನ :—ಇಲ್ಲಾ ಜಾನಕ್ ! ನಿನ್ನಾಣೆಗೂ ನಾನು ಅವರ ಮನೆ ಹೊಸಲು ದಾಟಲಿಲ್ಲ. ಅಗಸರ ಮನೆ ಮಡಿ ಪಂಚೆಯುಟ್ಟು, ಆ ಹೊಸ ಸರ್ಜ್‌ಕೋಟು ಹಾಕ್ಕೊಂಡು ಸೊಸೈಟಿ ಸೆಕ್ರೆಟರಿಗಳಿಗೆ ತೋರಿಸೋಣಾಂತಾ........

ಜಾನಕಿ :—ಏನ್ನಾ ?

ಭೀಮಸೇನ :—ಹೊಸ ಕೋಟನ್ನ.... "ಹಾಕಿಕೊಂಡು ಬನ್ನಿ ಭೀಮಸೇನ ಬೇಬಿ ! ನಾನು ನಿಮಗೆ ಮೊದಲನೆ ಗುದ್ದು ಕೊಟ್ಟರೆ ಆ ಕೋಟು ಇಪ್ಪತ್ತು ವರುಷ ಬಾಳುತ್ತೆ" ಅಂದಿದ್ದರು. ಸರೀ ಅಲ್ಲಿಗೆಷ್ಟೋ ದುಡ್ಡು ಮಿಗತ್ತೇಂತ ಸೊಸೈಟಿ ಕಡೆಗೆ ಹೋಗುತಿದ್ದೆ.

ಜಾನಕಿ :—ಅವರೂ ನಿಮ್ಮನ್ನ ಹಾಸ್ಯಮಾಡೋಕೆ ಪ್ರಾರಂಭಿಸಿದರೇ !

ಭೀಮಸೇನ :—ಹಾಸ್ಯವಲ್ಲ ಜಾನೀ ! ನಿಜವಾಗಿ ಕೈಮೇಲೆ ಕೈಹಾಕಿ ಹೇಳಿದರು. ಎದುರಿಗೆ ಪ್ರೆಸಿಡೆಂಟರೇ ನಿಂತಿದ್ದರು. ಸರಿ ಅಲ್ಲಿಂದ ಹೋಗುತ್ತಿರುವಾಗ ಹಿಂದೆ ಬರುತ್ತಿದ್ದ ಒಬ್ಬ ಹುಡುಗ ಪಕ್ಕದಲ್ಲಿ ಮೇಯುತ್ತಿದ್ದ ಕತ್ತೇನ ದೊಣ್ಣೇಲಿ ಹೊಡೀತಿದ್ದ ; ನಾನು ದೊಣ್ಣೆ ಅವನ ಕೈಯ್ಯಿಂದ ಕಿತ್ಕೊಳ್ಳೋಣ ಅಂತ ಹತ್ತಿರ ಹೋದೆ; ಆ ಕತ್ತೆ ನಾನೇ ಆ ಹುಡುಗ ಅಂತ ತಿಳಿದುಕೊಂಡು ನನ್ನ ಕಡೆ ಬಾಲ ತಿರುಗಿಸಿ ಝಾಡಿಸಿ ಒದೆಯಿತು. ಪಂಚೆ ಎಲ್ಲಾ ಕೊಳೆಯಾಯಿತು. ಸಿಟ್ಟು

ಬಂದು ಆ ದೊಣ್ಣೆ ತೆಗೆದುಕೊಂಡು ಆ ಕತ್ತೆಗೆ ಒಂದು ಕೊಟ್ಟೆ. ಓಡಿಹೋಗಿ ಪುಟ್ಟೂರಾವ್ ಮನೇ ಹತ್ತಿರ ನಿಂತುಕೊಂಡಿತು. ಇನ್ನೊಂದು ಏಟು ಕೊಡೋಣವೆಂದು ಅಟ್ಟಿಸಿಕೊಂಡು ಹೋದೆ. ಅಲ್ಲಿ ಆ ಗೇಟು ಬಾಗಿಲಿನ ಹತ್ತಿರ ಹೋಗೋವೇಳೆಗೆ ಪುಟ್ಟುರಾವ್ ಮಗ ಸುಬ್ಬಸಾಮಿ ಹಗ್ಗದಾಟ ಆಡುತಿದ್ದ. ನೋಡುತ್ತಾ ನಿಂತುಕೊಂಡೆ. ಹೊರಕ್ಕೆ ಬಂದು "ಒಳಗೆ ಬನ್ನೀ"ಂದ. "ನಾನು ನಿಮ್ಮನೆ ಹೊಸಲು ದಾಟೊಲ್ಲ" ಅಂದೆ.

ಜಾನಕಿ :—(ಕೈಲಿದ್ದ ಲೋಟ ಮೇಜಿನಮೇಲಿಟ್ಟು) ಸಾರ್ಥಕ ವಾಯಿತು ಬಿಡಿ ! ನಾನು ಹೇಳ್ಕೊಟ್ಟೇಂದ್ರೋ ?

ಭೀಮಸೇನ :—ಛೆ, ಛೆ, ನಾನೇ ಬರೋಲ್ಲಾಂದೆ. ಅದಕ್ಕೆ "ಹೋಗಲಿ; ಗೇಟೊಳಗೆ ಬನ್ನಿ"—ಅಂದ; ಹೋದೆ. ಹಗ್ಗ ಹಾರಿಸಿಕೊಂಡು ಕುಣಿಯುತ್ತಾ ಕುಣಿಯುತ್ತಾ ಹಾಡು ಹೇಳುತಿದ್ದ, ನನಗೂ ಕುಣೀಬೇಕೂ—ಅನ್ನಿಸಿತು. ಅವನೇ ಹಗ್ಗಕೊಟ್ಟು "ಹಾರೀ ಬೇಬಿ"!— ಅಂದ.

ಜಾನಕಿ :—ಆ ಚೋಟುದ್ದದಾ ಸುಬ್ಬಸಾಮಿ ಕೂಡ ನಿಮ್ಮನ್ನ "ಬೇಬಿ" ಅಂದನೇ ?

ಭೀಮಸೇನ :—ಅವನಿಗೆ ಇಂಗ್ಲೀಷ್ ಹೆಸರು ಕಂಡರೆ ಇಷ್ಟಾ ಜಾನೀ ! ಅದಕ್ಕೋಸ್ಕರ........

ಜಾನಕಿ :—ನಿಮಗೆ ಊರೋರ ಕೈಲೆಲ್ಲಾ "ಬೇಬಿ" ಅನ್ನಿಸಿಕೋಬೇಕೂಂತ ಆಸೆ ಅಂತ ಕಾಣುತ್ತೇ—ಅಂದರೇ ! ಏನೋ ನಿಮ್ಮ ತಂದೆ ತಾಯಿ ನಿಮ್ಮನ್ನ "ಬೇಬಿ" ಅಂತ ಕರೀತಿದ್ರೂ ಅಂದ್ರೆ ...ಊರಿನ ಮಕ್ಕಳೆಲ್ಲಾ....

ಭೀಮಸೇನ :—ನಮ್ಮ ಮಿಷನ್‌ಸ್ಕೂಲ್ ಪ್ರಿನ್ಸಿಪಾಲ್ ಚೈಲ್ಡ್ ಅಂತ ಇದ್ದರೂ ಜಾನೀ ! ಅವರು ಮುದುಕ ರಾದರೂ ಊರೋರೆಲ್ಲಾ " ಮಿಸ್ಟರ್ ಚೈಲ್ಡ್ " ಅಂತಾನೇ ಕರೀತಿದ್ರು.

ಜಾನಕಿ :—ನಿಮಗೆ ಬೇಬಿ ಅಂತ ಕರೆಸಿಕೊಳ್ಳೋಣ ಅಂದ್ರೆ ಇಷ್ಟಾ ಅನ್ನೀ !

ಭೀಮಸೇನ :—ಅಹಾಂ ! ಹಾಗಲ್ಲ !

ಜಾನಕಿ :—ನಿಮಗೆ ಹ್ಯಾಗೆ ಇಷ್ಟವೋ ಹಾಗೆಯೇ ಕರೆಸಿ ಕೊಳ್ಳಿ. ಆದರೆ ಈ ಕೆಟ್ಟಜನ ನಿಮ್ಮನ್ನ ಹಿಂದೆ ಹಾಸ್ಯ ಮಾಡೋದನ್ನ ಮಾತ್ರ ಕೇಳಲಾರೇಂದರೆ !

ಭೀಮಸೇನ :—ಇಲ್ಲಾ ಜಾನಕ್ ! ಪೂರ್ತಿ ಕೇಳಿಬಿಡು ಸುಬ್ಬು ಸಾಮಿ ವಿಚಾರ. ಆಮೇಲೆ ನಾನು ಕುಪ್ಪಳಿಸೋದಕ್ಕೆ ಹೋಗಿ ಸಲಸಲವೂ ಹಗ್ಗ ಹಾಕ್ಕೊಂಡು ಮುಗ್ಗರಿಸಿ ಬಿದ್ದೆ. ಪಂಚೆ ಇನ್ನೂ ಕೊಳೆ ಆಗಿಹೋಯಿತಲ್ಲಾ. ಆಗ ಕಡೇ ಬಾರಿ ಮುಗ್ಗರಿಸಿದಾಗ ಅವನು ನಕ್ಕ. ನನಗೆ ತುಂಬಾ ಸಿಟ್ಟು ಬಂತು. ಹಗ್ಗ ಅಲ್ಲೇ ಬಿಸಾಡಿ " ಇನ್ನೆಂಟು ದಿನ ದಲ್ಲೇ ಚೆನ್ನಾಗಿ ಕುಪ್ಪಳಿಸೋದನ್ನ ಕಲಿತು ಬಂದು ನಿನ್ನ ಕಾಂಪೌಂಡಿನಲ್ಲೇ ನಿನ್ನ ಸೋಲಿಸದೇ ಹೋದರೆ ನನ್ನ ಹೆಸರು ಭೀಮಸೇನ ಬೇಬಿ ಅಲ್ಲ " ಅಂದೆ.

ಜಾನಕಿ :—" ಬೇಬಿ " ಅನ್ನೋದಕ್ಕೆ ಬದಲಾಗಿ " ರಾವ್ " ಅನ್ನಬಾರದೇ ?

ಭೀಮಸೇನ :—ನೀನು ಹಾಗೆ ಅನ್ನು ಜಾನೀ.

ಜಾನಕಿ :—(ನೊಂದು) ಅಂತೀನೀಂದ್ರೆ ; ನೀವು ಹ್ಯಾಗ ನ್ನೊಂದ್ರೆ ಹಾಗಂತೀನಿ. ಆದರೆ ನಿಮ್ಮ ಶಪಥ ಮರೆತು ಕಾಫಿ ಕುಡಿದೇಳಿ. ಗುರುಪಾದ, ಅಮೃತರಾವ್‌ನ ನಮ್ಮ ಮನೆಗೆ ಕರೆತರುತಾನಂತೆ ; ಬರೋ ಹೊತ್ತಾಯಿತು.

(ಭೀಮಸೇನರಾವ್ ಅನ್ಯಮನಸ್ಕನಾಗುವನು.)

ಜಾನಕಿ :—ಯಾಕೇಂದ್ರೆ ? ಯೋಚಿಸುತ್ತಾ ನಿಂತಿರಿ ?

ಭೀಮಸೇನ :—ಯಾಕೂ ಇಲ್ಲ ಜಾನಕ್. ....ಹಾಂ........ ಗುರುಪಾದ, ಅಮೃತರಾವ್‌ನ ಕರಕೊಂಡು ಬರೋದಕ್ಕೆ ಹೋದನೋ ಬೆಳಗ್ಗೆ ಎದ್ದು ?

ಜಾನಕಿ :—ಹೌದು. ಈ ದಿನ ಅವರ ಕಾಲೇಜಿನಲ್ಲಿ ಯಾವುದೋ ಪಾರ್ಟಿ ಇದೆಯಂತೆ. ಅದರಲ್ಲಿ ಗುರುಪಾದ ಹಾಡು ತಾನಂತೆ. ಅಲ್ಲಿ ಹಾಡೋದಕ್ಕೆ ಮುಂಚೆ ಅಮೃತರಾವ್ ಮುಂದೆ ಒಂದು ಸಲ ಹಾಡಿ ತೋರಿಸಬೇಕೂಂತ........

ಭೀಮಸೇನ :—ಹಿ ಹ್ಹಿ ಹ್ಹೀ ! ನನಗೆಲ್ಲಾ ಅರ್ಥವಾಯಿತು ಜಾನ್ !

ಜಾನಕಿ :—ಏನೂಂದ್ರೆ ಅರ್ಥವಾದದ್ದು ?

ಭೀಮಸೇನ :—ನಾನು ನಿನ್ನ ಮದುವೆಯಾಗೋದಕ್ಕೆ ಮುಂಚೆ ನಿಮ್ಮಣ್ಣ ಶಂಕರನಾರಾಯಣನನ್ನು ಒಂದು ಘಳಿಗೆ ಬಿಟ್ಟಿರು ತ್ತಿರಲಿಲ್ಲ. ಅವನನ್ನು ಪಾರ್ಕಿಗೆ ಕರಕೊಂಡು ಹೋಗಿ ಅವನಿಗೆ ತಿಂಡಿಕೊಡಿಸೋದು, ಅವನ ಮುಂದೆ ಹಾಡೋದು, ಅವನಿಗೆ ಹೇಳಿ ಕೊಡೋದು, ಅವನ ನೊಂಟಕ್ಕೆ ಕೈ ಹಾಕ್ಕೊಂಡು ಕಣ್ಮುಚ್ಚಿಕೊಂಡು ನೆನೆಸೋದು....ಹೀಗೆಲ್ಲಾ ಮಾಡಿಬಿಟ್ಟಿದ್ದೀನಿ ಅನ್ನು.

ಜಾನಕಿ :—ಕಣ್ಮುಚ್ಚಿಕೊಳ್ಳೋದು ?

ಭೀಮಸೇನ :—ಹೌದು ಜಾ಼ !

ಜಾನಕಿ :—ಅದೇಕೆ ?

ಭೀಮಸೇನ :—ಅದು ಗಂಡಸರ ಗುಟ್ಟು........ನಿನ್ನ ಕಿವೀಲೆ ಗುಟ್ಟಾಗಿರಲೀ. ಹೊಸ ಭಾವನ್ಮೈದನ ಹತ್ತಿರಿದ್ದಾಗ ಅವನ ತಂಗೀನ ನೆನೆಸಿಕೊಳ್ಳೋದಕ್ಕೋಸ್ಕರ........

ಜಾನಕಿ :—(ನಾಚಿ) ಸಾಕು ನಿಮ್ಮ ಹುಡುಗಾಟ.

ಭೀಮಸೇನ :—ಹುಡುಗಾಟವಲ್ಲಾ ಜಾನಕ್ ! ಸತ್ಯವಾದ ಸಂಗತಿ. ಧಾರೆ ದಿನ ಜ್ಞಾಪಕ ಇದೆಯೋ ಜಾನ್ ?

ಜಾನಕಿ :—ಏನು ?

ಭೀಮಸೇನ :—(ತುಂಬಿದ ಆನಂದದಿಂದ) ನೀನು ಹಸೇಮಣೇ ಮೇಲೆ ನನ್ನ ಕಡೆಗೆ ಮೊಣಕಾಲು ಅಡ್ಡನಿಲ್ಲಿಸಿ ಹಿಮಾಲಯಾ ಪರ್ವತದ ಹಾಗೆ, ಕತ್ತು ತಗ್ಗಿಸಿ ಕೂತಿದ್ದಾಗ ನಾನು ಮೆಲ್ಲಗೆ ನನ್ನ ಕಾಲಿನ ಹೆಬ್ಬೆರಳು— ಎರಡನೇ ಬೆರಳ ಸಂದೀಲಿ ನಿನ್ನ ಎಡಗಾಲು ಬೆರಳನ್ನ ಇಕ್ಕಳದ ಹಾಗೆ ಸಿಕ್ಕಿಸಿ ಹಿಂಡಿದ್ದೂ ! !

ಜಾನಕಿ :—(ನಾಚಿ) ಏನೂಂದರೇ ! ಇಷ್ಟು ವಯಸ್ಸಾದರೂ ಮಗುವಿನ ಹಾಗೆ ಆ ಮಾತುಗಳನ್ನೆಲ್ಲಾ ಬಾಯಿತುಂಬಾ ನೆನೆಸಿ ಕೊಂಡಾಡುತೀರಲ್ಲಾ ! !

ಭೀಮಸೇನ :— ಅದನ್ನು ನೆನೆಸಿಕೊಳ್ಳುತ್ತಿರುವಾಗ ನನಗೆ ಆಗಿನ ವಯಸ್ಸೇ ಬಂದುಬಿಟ್ಟಿರುತ್ತೇ ಜಾನಕ್. ನಿನ್ನ ಕಣ್ಣಿಗೆ ಕಾಣಲ್ಲಾ, ಅಷ್ಟೇ....ಆಮೇಲೆ ಮೊದಲನೇ ಸಲ

ನಿಮ್ಮ ಮನೆಗೆ ಬಂದಿದ್ದಾಗ ; ನಾನಿದ್ದ ಹೊರಗಡೆ ರೂಮಿಗೆ ನಿಮ್ಮಮ್ಮ ನಿನ್ನ ಕೈಲಿ ಉಪ್ಪಿಟ್ಟಿನ ತಟ್ಟೆ ಕೊಟ್ಟು ಕಳುಹಿಸಿದರು. ನಾನು ಅರ್ಧ ತೆರೆದ ಬಾಗಿಲ ಹಿಂದೆ ಅವಿತುಕೊಂಡಿದ್ದೆ. ನೀನು, ನಾನಿಲ್ಲಾಂತ ತಿಳಿದುಕೊಂಡು ಒಳಕ್ಕೆ ಹೆಜ್ಜೆ ಇಟ್ಟು ಉಪ್ಪಿಟ್ಟಿನ ತಟ್ಟೆ ಚಾಪೆಯಮೇಲೆ ಇಡುತ್ತಿದ್ದ ಹಾಗೇ ನಿನ್ನ ಕೈಬೆರಳು ಕಚ್ಚಿ, ನೀನು ಕಿರುಚಿಕೊಂಡು ಓಡಿ ಹೋದದ್ದು........ಅದೆಲ್ಲಾ........

(ಆನಂದಭರದಲ್ಲಿ ಮಾತು ಹೊರಡದೆ ಹೆಂಡತಿಯ ಕೈಹಿಡಿದು)

ಜಾ ! ನಿನಗೆ ಈ ನೆನಪುಗಳಿಂದ ಹರ್ಷವಾಗುವುದಿಲ್ಲವೇ ! ಮತ್ತೆ ಆ ನಿನ್ನ ಹುಡುಗತನದ ದಿನಗಳ ನೆನಪು ಸಂತೋಷ ಪಡಿಸುವುದಿಲ್ಲವೇ ?

ಜಾನಕಿ :—ಇನ್ನೂ ನಾವು ಗುರುಪಾದನ ಮದುವೆ ನಡೆಸಿ ಅವನೂ ಅವನ ಹೆಂಡತಿ ಆಡೋ ಆಟಗಳನ್ನು ನೋಡಿ ಸಂತೋಷಪಡಬೇಕೇ ಹೊರತು........

ಭೀಮಸೇನ :—ಅವರೇನಾಡಾರೂ ಜಾನಕ್ ! ನಾವಾಡಿದ್ದರಲ್ಲಿ ಕೋಟೀಲಿ ಒಂದು ಭಾಗಾನೂ ಆಡಲಾರರು. ಹುಡುಗರ ಮುಖದಲ್ಲಿ ಹುಡುಗತನವೇ ಇಲ್ಲ. ಆಡೋ ವಯಸ್ಸಿನಲ್ಲಿ ಆಟದಲ್ಲಿ ಜೀವವಿಲ್ಲ........ ಅದೂ ಗುರುಪಾದ, ಅಮೃತ ರಾವ್ ಜೊತೇಲಿ ಇಂಗ್ಲೆಂಡಿಗೆ ಹೋಗಿ ಬಂದುಬಿಟ್ಟರಂತೂ, ಇನ್ನೆಷ್ಟು ಬದಲಾಯಿಸಿ ಹೋಗುತಾನೋ !

ಜಾನಕಿ :—(ಕಾಫಿ ಲೋಟ ಮುಟ್ಟಿ) ಕಾಪಿ ಎಲ್ಲಾ ತಣ್ಣಗಾಗಿ ಹೋಯಿತು.

ಭೀಮಸೇನ :—(ಲೋಟ ತೆಗೆದುಕೊಂಡು) ಇರಲೀ ಬಿಡು. ಕಾಪಿ ಬಿಸಿಯಾಗಿರಬೇಕೂಂತ ಏನು ರೂಲ್‌ಸೂ ? (ಗಟ ಗಟನೆ ಕುಡಿದು ಲೋಟ ಜಾನಕಮ್ಮನ ಕೈಗೆ ಕೊಡುವನು.)

ಜಾನಕಿ :—(ಪಗ್ಗವನ್ನು ಕೈಗೆ ತೆಗೆದುಕೊಂಡು) ನೀವು ಸ್ನಾನ ಮಾಡೇಳಿ ; ನೀರು ಕಾದಿದೆ.

ಭೀಮಸೇನ :—ಹಗ್ಗ ಬೇಕು ಜಾನಕ್ ! ಸುಬ್ಬಸಾಮಿಾ........

ಜಾನಕಿ :— ಅವರನ್ನೆಲ್ಲಾ ಮರೆತು ಬಿಡಿ ! ನಿಮ್ಮ ದಮ್ಮಯ್ಯ. ಅವರು ನಿಮ್ಮನ್ನ ನನ್ನಾಣೆಗೂ ಹಾಸ್ಯಮಾಡೋಕ್ಕೋಸ್ಕರ ವಾಗಿ........

ಭೀಮಸೇನ :—(ಜಾನಕಮ್ಮನ ಕೈಹಿಡಿದು) ಮರೆತುಬಿಡುತ್ತೇನೆ! ಆದರೆ ನೀನು " ಬಿಡತೂ " ಅನ್ನು

ಜಾನಕಿ :—ಯಾತಕ್ಕೇಂದರೆ....?

ಭೀಮಸೇನ :—ನಿನ್ನ ಮೇಲೆ ಯಾಕೆ ಆಣೆ ಇಟ್ಟುಕೊಂಡೆ ? ಅದಕ್ಕೆ.

ಜಾನಕಿ :—" ಬಿಡತೂ "ಂದರೇ.

ಭೀಮಸೇನ :—ಸಾವಿರಸಲ.

ಜಾನಕಿ :—ಸಾವಿರ ಸಲ ಬಿಡತೂ.

[ಭೀಮಸೇನರಾವ್ ಬಾಗಿಲ ಕಡೆಗೆ ನಡೆಯುತ್ತಿದ್ದವನು ತಟ್ಟನೆ ನಿಂತು ಕ್ಷಣಕಾಲಾನಂತರ ಹಿಂದಿರುಗಿ ಹಿಂಬಾಲಿಸುತ್ತಿರುವ ಜಾನಕಮ್ಮನನ್ನು ತಡೆದು]

ಭೀಮಸೇನ :—ಜಾನಕ್ !

ಜಾನಕಿ :—(ಆಶ್ಚರ್ಯದಿಂದ) ಏನೊಂದರೆ ? ಹೀಗೆ ತಿರುಗಿ ದಿರಿ ! ಮತ್ತೆ ನಮ್ಮ ಮದುವೆ ವಿಚಾರ ಏನಾದರೂ ನೆತ್ತಿಗೆ ಹತ್ತಿತೋ ?

ಭೀಮಸೇನ :—ಹತ್ತಿದರೆ ಹಿತವಾಗೇ ಇರುತ್ತೆ. ಅದಲ್ಲಾ ಜಾ಼ !....ನಿಧಾನವಾಗಿ ಮೂಗಿನಲ್ಲಿ ಉಸಿರು ಎಳೆದುಕೋ !

ಜಾನಕಿ :—ಯಾಕೇಂದರೆ !

ಭೀಮಸೇನ : ರಂಗಣ್ಣೋರ ಮನೆಯಿಂದ ಏನೋ ಕರಿದ ವಾಸನೆ ಬರುತಾ ಇಲ್ಲವೆ ?

ಜಾನಕಿ :—ಹೌದು ಬರುತಾ ಇದೆ. ಇವತ್ತು ರಂಗಣ್ಣೋರ ಮೊಮ್ಮಗನ ಹುಟ್ಟಿದ ಹಬ್ಬ. ಅದಕ್ಕೋಸ್ಕರ.........

ಭೀಮಸೇನ :—ಕಾಯೊಬ್ಬಟ್ಟು ತಟ್ಟುತ್ತಿದ್ದಾರಲ್ಲವೇ ?

ಜಾನಕಿ :---ಅದು ಹ್ಯಾಗೆ ಗೊತ್ತಾಯಿತು ನಿಮಗೆ ?

ಭೀಮಸೇನ :—ವಾಸನೆಯಿಂದ ! ಅಷ್ಟು ತಿಳಿಯೊಲ್ಲವೇ ?.... ಅಲ್ಲಾ !....ನನ್ನ ರಂಗಣ್ಣ ಕರೀಬೇಕೂಂತಿದ್ದ.

ಜಾನಕಿ :—(ನಸುಕೋಪದಿಂದ) ಸದ್ಯ ಸುಮ್ಮನಿರಿ. ನಾಚಿಗೆ ಗೇಡು. ಮೊಮ್ಮಗನ ಹುಟ್ಟಿದ ಹಬ್ಬಕ್ಕೆ ಬೀದಿಯವರ ನ್ನೆಲ್ಲಾ ಊಟಕ್ಕೆ ಕರೀತಾರೆ ಸದ್ಯ, ನಡೀರಿ. ಮಡಿ ಉಟ್ಕೊಳ್ಳಿ—

ಭೀಮಸೇನ :— ಬೀದಿಯೋರನ್ನೆಲ್ಲಾ ಅಲ್ಲಾ ಜಾನೀ ! ನಾನೂ– ಪಕ್ಕದ ಮನೇಲಿರೋನೂ– ಬಾಲ್ಯಸ್ನೇಹಿತ !— ಅಲ್ಲದೇ ಹೋದ ಸಲ ಆತನ ಮನೆಗೆ ಊಟಕ್ಕೆ ಹೋಗಿ ದ್ದಾಗ " ನಿಮ್ಮ ಮನೆ ಕಾಯೊಬ್ಬಟ್ಟಿನ ರುಚೀನೇ ರುಚಿ "

ಅಂದದ್ದಕ್ಕೆ "ಇನ್ನುಮೇಲೆ ನಮ್ಮ ಮನೇಲಿ ಎಂದು ಕಾಯೊಬ್ಬಟ್ಟು ಮಾಡಿದರೂ ನಿನ್ನಬಿಟ್ಟು ತಿನ್ನೊಲ್ಲ ಬೇಬೀ!" ಅಂದಿದ್ದ. (ಆಶಾಪೂರಿತ ದನಿಯಲ್ಲಿ) ಮುಕ್ಕಾಲು ಪಾಲು ಇನ್ನು ಸ್ವಲ್ಪ ಹೊತ್ತಿಗೆ ಬಂದು ಕರೀಬಹುದು.... ....(ನೊಂದು) ಇಲ್ಲ ಮರೆತುಬಿಡುತಾನೋ! ಪಾಪ!.... ಏನುಮಾಡಿಬಿಡುತಾನೋ ಕಾಣೆನಲ್ಲಾ!.... ... .. ಹೋಗಿ, ಜ್ಞಾಪಿಸಿಬಿಟ್ಟು ಬಂದುಬಿಡಲೇಂತ........

ಜಾನಕಿ :—(ಕೈಹಿಡಿದು) ನೀವು ಒಳಕ್ಕೆ ಬನ್ನೀ! ಕಾಯೊಬ್ಬಟ್ಟು ತಿನ್ನಬೇಕೂನ್ನಿಸಿದರೆ ಇವತ್ತೇ ಮಾಡುತೇನೇ (ಕೈಹಿಡಿದು ಕರೆದೊಯ್ಯುವಳು)

ಭೀಮಸೇನ :—(ಒಳಕ್ಕೆ ಹೋಗುತಾ) ಒಬ್ಬಟ್ಟಿಗೋಸ್ಕರ ಅಲ್ಲಾ ಜಾ಼ !....ಪಾಪಾ !....ರಂಗಣ್ಣಾ ! (ಒಳಕ್ಕೆ ಹೋಗುವರು)

[ಕ್ಷಣಕಾಲಾನಂತರ ಇತ್ತಲಿಂದ ಇಪ್ಪತ್ತು ವರುಷದ ಗುರುಪಾದ ದಟ್ಟಿ, ಷರ್ಟ್, ಕೋಟುಗಳನ್ನು ಧರಿಸಿ, ಕೈಲಿ ಎರಡು ಕಟ್ಟುಗಳನ್ನು ಹಿಡಿದು ಬಲಭಾಗದ ಹೊರಬಾಗಿಲಿನಿಂದ ಕೈಸಾಲೆಗೆ ಬರುವನು-- ಹಿಂದೆ ಸೂಟ್ ಧರಿಸಿದ ಇಪ್ಪತ್ತೆರಡು ವರುಷದ ಅಮೃತರಾವ್ ಹಿಂಬಾಲಿಸಿ ಬರುವನು. ಗುರುಪಾದನ ಮುಖದಲ್ಲಿ ಸಮಾಧಾನ-- ಹರ್ಷ ; ಅಮೃತರಾವ್ ಮುಖದಲ್ಲಿ ಅಹಂಕಾರ--ಧೋರಣೆ.]

ಗುರುಪಾದ :—ಬನ್ನಿ ಮಿಸ್ಟರ್ ಅಮೃತರಾವ್ ! ಹೀಗೆಬನ್ನಿ ಕೂಡಿ ಕುರ್ಚೀಲಿ. ನಾನು ಸ್ನಾನಮಾಡಿಕೊಂಡು ಬಂದು ಬಿಡುತ್ತೇನೆ.

[ಅಮೃತರಾವ್ ಕುರ್ಚಿಯ ಧೂಳು ಹೊಡೆದು ಮೆಲ್ಲಗೆ ಕುಳಿತು, ಸುತ್ತಲೂ ತಿರಸ್ಕಾರ ದೃಷ್ಟಿಯಿಂದ ನೋಡುವನು.]

ಗುರುಪಾದ :—(ಕಟ್ಟುಗಳನ್ನು ಬಿಚ್ಚಿ, ಹೊಸ ಜೊತೆ ಷೂಸ್, ಕಾಲುಚೀಲ, ಹೊಸ ಸಿಲ್ಕ್ ಷರ್ಟ್, ಹೊಸ ಫ್ಲಾನಲ್ ಪ್ಯಾಂಟ್ ತೆಗೆದು ಮೇಜಿನಮೇಲಿಡುತ್ತಾ) ಅಂತೂ ಈ ದಿನದಿಂದ ನಾನೂ ಈ ಷರಾಯಿ, ಷೂಸ್ ಎಲ್ಲಾ ಅಭ್ಯಾಸಮಾಡಬೇಕಾಯಿತು.

ಅಮೃತರಾವ್ :—ನೀವು ಈ ಬಗೆ ಡ್ರೆಸ್‌ನಲ್ಲಿ ಅಷ್ಟುದಿನ ಇದ್ದ ಮೇಲೇನೇ ನಿಮಗೆ ಅದರ ಡೀಸೆನ್ಸೀ, ಕನ್ವೀನಿಯನ್ಸ್, ಡಿಗ್ನಿಟಿ ಎಲ್ಲಾ ತಿಳಿಯುತ್ತೇ ಹೊರತೂವೇ....

ಗುರುಪಾದ :—( ಮುಗುಳ್ನಗೆಯಿಂದ ) ಕನ್ವೀನಿಯೆನ್ಸೂ, ಕಂಫರ್ಟೂ, ಈ ಡ್ರೆಸ್ಸಿನಲ್ಲಿರಬಹುದೇನೋ ; ಆದರೆ " ಡಿಗ್ನಿಟಿ, ಡೀಸೆನ್ಸೀ—ಇದರಲ್ಲೇ ಇರೋದೂ, ಬೇರೆ ಡ್ರೆಸ್‌ನಲ್ಲಿಲ್ಲಾ "ನ್ನೋದು ಸರಿಯಲ್ಲ.

ಅಮೃತರಾವ್ :—(ನಸುಮುನಿದು) ನಾನು ಆಗಲೇ ಹೇಳಿಬಿಟ್ಟೆ ನಲ್ಲ; ಇದೆಲ್ಲಾ ಬ್ರೀಡಿಂಗಿಗೆ ಸೇರಿದ್ದು. ಆಯಾ ಫ್ಯಾಮಿಲೀ ಪೊಜಿಷನ್‌ಗೆ ಹೊಂದಿಕೊಂಡೇ ಕನ್ವಿಕ್ಷನ್ಸ್ ಕೂಡಾ ಬೆಳೆದು ಬಂದಿರುತ್ತವೆ.........ಏ ಮೈನ್— ಅದು ಬೇರೇ ವಿಚಾರ ವಾಯಿತು. ನಾಳೆ ನಾನೂ ನೀವೂ ಇಂಗ್ಲೆಂಡಿಗೆ ಹೊರ ಟಾಗಂತೂ ನಮ್ಮ ಫಾದರ್ ಎಕ್ಸ್‌ಪ್ರೆಸ್ ಮಾಡಿರೋ ಹಾಗೇ,—ಟೂ ಇಂಡಿಯನ್ ಪ್ರಿನ್ಸಸ್, ಅದೂ ಟ್ವಿನ್ಸ್ ಇಂಗ್ಲೆಂಡಿಗೆ ಸೆಯಿಲ್ ಮಾಡಿದ ಹಾಗಿರಬೇಕು. ಅಲ್ಲೂ ಸಹ ಹಾಗೇ ಇದ್ದು ಫ್ಯಾಮಿಲೀ ಡಿಗ್ನಿಟಿ ಕೀಪ್ ಅಪ್ ಮಾಡಿಕೋ ಬೇಕೂ.

ಗುರುಪಾದ :—ಅಂತೂ, ಮಿಸ್ಟರ್ ಅಮೃತರಾವ್ ! ನನಗೀ ಏಪಿಂಗ್ ಆಫ್ ದಿ ವೆಸ್ಟ್ ಅಷ್ಟು ಹಿಡಿಸೊಲ್ಲ.

ಅಮೃತರಾವ್ :— (ಕೈಗಡಿಯಾರವನ್ನು ನೋಡಿ) ಹಂ-- ಲೆಟ್ ಅಸ್ ಡ್ರಾಪ್ ದಿಸ್ ಅನೆಂಡಿಂಗ್ ಡಿಸ್ಕರ್ಷನ್. ಆಗಲೇ ನೈನ್ ಟ್ವೆಂಟಿ ಆಗುತಾ ಬಂತು. ನಾನು ಪೋಸ್ಟ್ಆಫೀಸ್ ಕಡೆಗೆ ಹೋಗಿ ಬರುತೇನೆ—ಫಾದರ್ಸ್ ಲೆಟರ್ ನೋಡಿ ಕೊಂಡು, ಬಹುಶಃ ನೆಕ್ಸ್ಟ್ ವೀಕ್ ನಾನು ಬಾಂಬೇಗೆ ಹೋಗಿ ಎಸ್. ಎಸ್. ರಜಪುಟಾಣದಲ್ಲಿ ಎರಡು ಸೀಟ್ ಅಡ್ವಾನ್ಸ್ ಆಗಿ ಬುಕ್ ಮಾಡಿಸಿ ಬರಬೇಕಾಗಬಹುದು. (ಕುರ್ಚಿಯಿಂದೆದ್ದು ಸರಿಯುವನು)

ಗುರುಪಾದ :— ಇಷ್ಟೇಕವಸರ ಮಿಷ್ಟರ್ ಅಮೃತರಾವ್ ! ನಿಧಾನವಾಗಾಗಲೀ ; ಇನ್ನೂ ಮ್ಯಾರೇಜಿಗೇನೇ ಹದಿನೆಂಟು ದಿವಸ ಇದೆ. ಹೀಗಿರೋವಾಗ........

ಅಮೃತರಾವ್ :— ( ಮುಂದೆ ನಡೆದು.) ಮ್ಯಾರೇಜ್ ತನ್ನ ಪಾಡಿಗೆ ತಾನು ನಡೆಯುತ್ತೆ. ಬಟ್ ಐ ಮಸ್ಟ್ ಥಿಂಕ್ ಆಫ್ ಅವರ್ ಫ್ಯೂಚರ್ ಎಜುಕೇಷನ್ ಅಂಡ್ ಇಟ್ಸ್ ಡೀಟೇಲ್ಸ್....ನೀವು ಸ್ನಾನ ಮಾಡಿಬಿಡಿ. ಅಷ್ಟುಹೊತ್ತಿಗೆ ಪೋಸ್ಟ್ ನೋಡಿಕೊಂಡು ಬಂದು ಬಿಡುತ್ತೇನೆ.

ಗುರುಪಾದ :—ಹಾಗೇ ಆಗಲೀ !

ಅಮೃತರಾವ್ :—(ನಿಷ್ಕ್ರಮಿಸಿದ್ದವನು ತಟ್ಟನೆ ತಿರುಗಿ) ಹಂ ! ಮಿಸ್ಟರ್ ಗುರುಪಾದ್! ಅ ಪ್ಯಾಂಟ್ಸ್‌ನ ಹಾಕಿಕೊಳ್ಳೋದಕ್ಕೆ ಮುಂಚೆ ಪಂಚೇನ ಕೊಡವಿದ ಹಾಗೆ ಕೊಡವಿಬಿಟ್ಟೀರಾ ! ಐರನ್ ಹೋಗಿ ಕೊಳದಪ್ಪಲೆಯಾದೀತು. (ನಿಷ್ಕ್ರಮಣ)

[ಗುರುಪಾದನು ನೊಂದು ಅತ್ತಲೇ ನೋಡುತ್ತಿರುವನು. ಹಿಂದಿನಿಂದ ಜಾನಕಮ್ಮನು ಬರುವಳು.]

ಜಾನಕಿ :—ಗುರೂ ! ಅದೇಕೆ ನಿನ್ನ ಭಾವವ್ಯೆದ ಹೊರಟು ಹೋದರೂ ?

ಗುರುಪಾದ :—ಸದ್ಯ ಇನ್ನೂ ಭಾವವೈದುನನಾಗಿಲ್ಲ ದೇವರ ದಯೆಯಿಂದ—ಅವರು ಪೋಸ್ಟ್ ಆಫೀಸಿಗೆ ಹೋಗಿಬರುತಾರಮ್ಮ.

ಜಾನಕಿ :—ಇದು ಯಾಕೆ ಮಗೂ ಹೀಗಂತೀ ?

ಗುರುಪಾದ :—ಅಲ್ಲಮ್ಮಾ ! ನಾನು ಇಷ್ಟು ದೊಡ್ಡೋನಾಗಿ ಬೆಳೆದೂ, ಬಟ್ಟೆಹಾಕ್ಕೊಳದನ್ನ ಕೂಡಾ ಇವರಿಂದ ಕಲೀಬೇಕೇ ? !

ಜಾನಕಿ :—(ತಲೆಯನ್ನ ನೇವರಿಸುತ್ತಾ) ನೋಡು ಮಗೂ ! ದೊಡ್ಡೋರ ಸಂಬಂಧ ಮಾಡೋವಾಗ ನಾವೂ ಅವರಂತೆ ಕುಣಿಯೋದಕ್ಕೆ ಸಿದ್ಧವಾಗೇ ಇರಬೇಕು. ನಿಮ್ಮಪ್ಪ, ನಿಮ್ಮ ತಾತ, ನಿಮ್ಮುತ್ತಾತ, ಯಾರೂ ಸೀಮೆಗೆ ಹೋಗಿ ಬಂದಿಲ್ಲ. ಏನೋ ನಿನ್ನ ಭಾಗದ ದೇವರು ಪ್ರಸನ್ನನಾಗಿದಾನೆ ; ಇಂಥ ಸಂಬಂಧ ಬಂದಿದೆ. ಅವರ ಸಂಗಡ ಇರೋವಾಗ ಅವರಂತೆ ಇದ್ದುಬಿಟ್ಟರಾಯಿತು. ನಾಳೆ ನಿನಗೆ ಭಾರೀ ಕೆಲಸವಾದಮೇಲೇ—ನನ್ನ, ನಿಮ್ಮ ತಂದೇನ ನೀನು ಎಷ್ಟು ಸುಖವಾಗಿಟ್ಟುಕೊಂಡಿರಬಹುದು ನೋಡು !—ಅಷ್ಟಕ್ಕೋಸ್ಕರವಾದರೂ ನೀನು ಈಗ ಅವರನ್ನನುಸರಿಸಬೇಕು.

ಗುರುಪಾದ :—ಏನೋ, ನಿಮ್ಮಿಷ್ಟ; ನೀವು ಹೇಳಿದ ಹಾಗೆ ಕೇಳಿಬಿಟ್ಟರೇ ನಿಮ್ಮ ಮನಸ್ಸಿಗೆ ಸಂತೋಷ ; ಅದೊಂದೇ ನನಗೆ ಬೇಕಾದದ್ದು....ಅಪ್ಪ ಎಲ್ಲಿ ?

ಜಾನಕಿ :—ಸ್ನಾನಮಾಡುತಾ ಇದಾರೆ. ಏಳು ; ನೀನೂ ಮಡಿ ಉಟ್ಕೊಂಡು ಬಿಡು ನಿನ್ನ ಭಾವನ್ನೈದ ಬರೋ ವೇಳೆಗೆ.

ಗುರುಪಾದ :—ಆಗಲಮ್ಮ.

[ಜಾನಕಮ್ಮ ಒಳಕ್ಕೆ ಹೋಗುವಳು. ಗುರುಪಾದನು ತನ್ನ ಜೇಬಿನಿಂದ ರೋಲ್ಡ್‌ಗೋಲ್ಡ್ ಗುಂಡಿಗಳನ್ನು ತೆಗೆದು ದಾರ ಕಟ್ಟಿ ಸಿಲ್ಕ್ ಷರ್ಟ್‌ಗೆ ಹಾಕುತ್ತಾ ಹಾಡುತ್ತಿರುವನು.]

ರಾಗ—ಹಿಂದುಸ್ತಾನೀ ಭೈರವಿ. ತಾಳ—ತ್ರಿತಾಲ್

ಚಕೋರಂಗೆ ಚಂದ್ರಮನಾ । ಬೆಳಕೀನ ಚಿಂತೇ ।
ಅಂಬುಜಕೆ ಭಾನುವಿನಾ । ಉದಯದ ಚಿಂತೇ ॥
ಭ್ರಮರಂಗೆ ಪರಿಮಳದಾ । ಬಂಡುಣ್ಣುವ ಚಿಂತೇ ।
ನಮಗೆ ನಮ್ಮ ಕೂಡಲಸಂಗಮ । ದೇವನ ನೆನೆವಚಿಂತೇ ॥

[ಹಾಡು ಮುಗಿಯುತ್ತಿರುವಂತೆಯೇ ಹಿಂದಿನಿಂದ ಭೀಮಸೇನರಾಯನು ಧೋತ್ರದ ನೆರಿ ತೀಡುತ್ತಾ ಬರುವನು.]

ಭೀಮಸೇನ :—ಗುರೂ ! ಏನುಮಾಡುತಿದ್ದೀ ?

ಗುರುಪಾದ :—ಸಿಲ್ಕ್ ಷರ್ಟಿಗೆ ಗುಂಡಿ ಹಾಕುತಿದೇನಪ್ಪಾ.

ಭೀಮಸೇನ :—( ಆಶಾಪೂರ್ಣದನಿಯಿಂದ ) ಸಿಲ್ಕ್ ಷರ್ಟೂ ! ಯಾರಿಗೋಸ್ಕರ ತಂದೇ ?

ಗುರುಪಾದ :—(ಷರ್ಟನ್ನು ತಂದೆಯ ಕೈಗೆ ಕೊಟ್ಟು) ನಿನಗೋಸ್ಕರಾಪ್ಪಾ !

ಭೀಮಸೇನ :—( ಆನಂದದಿಂದ ಷರ್ಟ್ ಕೈಗೆ ತೆಗೆದುಕೊಂಡು ನೋಡಿ) ಗುಂಡೀನೂ ಜೊತೇಲೇ ತಂದುಬಿಟ್ಟಿದೀಯಲ್ಲಾ !

ಒಳ್ಳೇ ಜಾಣ ಮಗೂ ನೀನೂ. (ಗುರುಪಾದನ ಬೆನ್ನನ್ನು ಮೃದವಾಗಿ ಚಪ್ಪರಿಸಿ) ಒಳಗೆ ಹೋಗಿ ದೇವರ ಹತ್ತಿರ ಇರೋ ಪಂಚಪಾಳದಿಂದ ಸ್ವಲ್ಪ ಅರ್ಕಿನ ತಂದು, ಇದರ ಕತ್ತಿನ ಪಟ್ಟಿ ಒಳಕ್ಕೆ ಮುಟ್ಟಿಸಿ ಬಿಡು. ಇಲ್ಲದಿದ್ದರೆ (ದನಿ ತಗ್ಗಿಸಿ) ಹೊಸ ಬಟ್ಟೇನ ಹಾಗೇ ಹಾಕಿಕೊಂಡರಲ್ಲಾಂತ ನಿಮ್ಮಮ್ಮ ....ಪಾಪ........

[ಗುರುಪಾದನು ಒಳಗೆ ಹೋಗಿ ಬರುವುದರಲ್ಲಿ ಭೀಮಸೇನರಾಯನು ಷರ್ಟಿನ ತೋಳು ತೂರಿಸಿ, ಕತ್ತನ್ನು ಮಾತ್ರ ತೂರಿಸದೆ ಕಾದಿರುವನು.]

ಭೀಮಸೇನ :—(ಗುರುಪಾದನು ಬಂದದ್ದನ್ನು ಕಂಡು) ಬಂದೆಯಾ ಮಗೂ! ಹಾಂ! ಕತ್ತಿನ ಒಳಗೆ, ಸ್ವಲ್ಪ, ಸುಮ್ಮನೇ ಶಾಸ್ತ್ರಕ್ಕೆ, ಕೊಂಚ, ಸೋಕಿಸಿ ಬಿಡು.

[ಗುರುಪಾದನು ಅರ್ಕ್ಯನ ಮುಟ್ಟಿಸಿ, ತಂದೆಗೆ ಷರ್ಟನ್ನು ಸರಿಯಾಗಿ ತೊಡಿಸುವನು.]

ಭೀಮಸೇನ :— ( ಷರ್ಟನ್ನೂ ಗುಂಡಿಗಳನ್ನೂ ನೋಡಿಕೊಂಡು ತುಂಬಿದ ಸಂತೋಷದಿಂದ ಮಗನನ್ನಪ್ಪಿ) ಅಂತೂ ತುಂಬಾ ಜಾಣಾ ಮಗೂ ನೀನೂ !........ಹ ಹ್ಹಾ ! ನನಗಿಷ್ಟವಾಗಿರೋ ಗುಂಡಿಗಳೂ, ಬಟ್ಟೆ ಎಲ್ಲಾ ಆರಿಸಿ ನನ್ನ ಛತೆಗೆ ಸರಿಯಾಗಿ ಹೊಲಿಸಿಕೊಂಡೇ ತಂದುಬಿಡುತೀಯಲ್ಲಾ ! ಹಹ್ಹಾ !....ನಾಳೆ ಇಂಗ್ಲೆಂಡಿಂದ ಬರೋವಾಗಲೂ, ನನಗೆ ಅಲ್ಲಿಂದ ತರಹೇವಾರೀ ಷರಟ್‌ಗಳೂ, ಗುಂಡಿಗಳೂ, ಒಂದು ಒಳ್ಳೇ ರಾಗಮಾಲಿಕೇ, ಆಂ ?....ಒಂದು ರೇಷ್ಮೆ

ಸೊಳ್ಳೇಪರದೇ, ಆಮೇಲೆ (ಅತ್ತನೋಡಿ) .ಓಹೋ ಷೂಸ್ ಬೇರೇ ತಂದುಬಿಟ್ಟಿದೀಯಾ ?

ಗುರುಪಾದ :—ಹೌದಪ್ಪಾ !

ಭೀಮಸೇನ :—(ಮಗನ ಭುಜದಮೇಲೆ ಕೈಯಿಟ್ಟು) ಅವನ್ನ ನಿನಗೋಸ್ಕರ ತಾನೇ ತಂದಿರೋದೂ ?

ಗುರುಪಾದ :—ಅಲ್ಲಲ್ಲಾ – ನಿನಗೋಸ್ಕರ.

ಭೀಮಸೇನ :—(ಆಶ್ಚರ್ಯ—ಸಂತೋಷದಿಂದ) ನನಗೋಸ್ಕರಾ?

ಗುರುಪಾದ :—ಹೌದಪಾ .

ಭೀಮಸೇನ :— ನಾನು ಈಗ ಷೂಸ್ ಹಾಕಿಕೊಳ್ಳೋದು ಅಭ್ಯಾಸಮಾಡಲೇ ?

ಗುರುಪಾದ :—ಹೌದಪ್ಪಾ ! ಇಲ್ಲದಿದ್ದರೇ ನಾಳೆ ನಾನು ಇಂಗ್ಲೆಂಡಿನಿಂದ ಷೂಸ್ ಕಳುಹಿಸಿದರೆ ಹೇಗೆ ಉಪಯೋಗಿಸೋದು ? ಅಲ್ಲೇನು ಎಕ್ಕಡ, ಜೋಡೂ ಒಂದೂ ಸಿಗೊಲ್ಲ.

ಭೀಮಸೇನ :—(ಅಲ್ಲೇ ನಿಂತು ಷೂಸ್‌ನ ದಿಟ್ಟಿಸಿ ನೋಡಿ) ನಿಜ ನಿಜ ! ನೀನು ನಿಜವಾಗಲೂ ತುಂಬಾ ಜಾಣಾ ಗುರೂ !.... ಆದರೆ ಇವು ಕಚ್ಚಿಬಿಟ್ಟರೋ ?....!

ಗುರುಪಾದ :—ಕಚ್ಚದ ಹಾಗಿರಲೀಂತಾನೇ ಈ ಕಾಲುಚೀಲ ತಂದಿರೋದು. (ಜೇಬಿನಿಂದ ಕಾಲುಚೀಲಗಳನ್ನು ತೆಗೆದು ಕೊಡುವನು.)

ಭೀಮಸೇನ :—ಭೇಷ್ ! ಭೇಷ್ !....ನಮ್ಮಪ್ಪ ಇದ್ದನಲ್ಲ ಗುರು, ನಿಮ್ಮ ತಾತಾ....ಪಾಪ ನೀನು ನೋಡಿರಲಿಲ್ಲಾನ್ನು

....ಅವನು ಕೂಡಾ ನನ್ನ ಆಶೇನಾ ನಿನ್ನ ಹಾಗೆ ತಿಳಿದು ಕೊಂಡಿರಲಿಲ್ಲ.... ಆಂ........ಈಗ ಅವನ್ನ ಹಾಕಿಕೊಂಡು ನೋಡಲೋ ?

ಗುರುಪಾದ :—ಹೀಗೆ ಬಾಪ್ಪಾ! ಕುರ್ಚಿಯುಮೇಲೆ ಕೂತುಕೋ ನಾನು ಹಾಕುತ್ತೇನೆ ಷೂಸ್‌ನ.

[ಭೀಮಸೇನರಾಯನು ಕುರ್ಚಿಯುಮೇಲೆ ಕೂಡುವನು. ಗುರುಪಾದನು ಕಾಲುಚೀಲ ತೊಡಿಸಿ, ಷೂಸ್ ಹಾಕಿ, ಕಟ್ಟುತ್ತಿರುವನು.]

ಭೀಮಸೇನ :—ಅಂತೂ ಎಕ್ಕಡದಷ್ಟು ನಿರಾತಂಕವಲ್ಲ ಈ ಸಂಸಾರ.

ಗುರುಪಾದ : —ಆದರೆ ಇದರಿಂದ ಹೆಜ್ಜೆ ಬಿರಿಯೊಲ್ಲಾಪ್ಪ !

ಭೀಮಸೇನ :—ಹೌದೇನು ?

ಗುರುಪಾದ :—ಹೌದಪ್ಪ ! ಹೆಜ್ಜೆ ಒಳ್ಳೆ ಹೂ ಇದ್ದಹಾಗೆ ಇರುತ್ತೆ—ಮನೆಗೆ ಬಂದು ಇದನ್ನ ತೆಗೆದಮೇಲೆ.

ಭೀಮಸೇನ :—ಮಗೂ ! ನೀನು ಇಂಗ್ಲೆಂಡಿನಿಂದ ತರಹೇವಾರಿ ಷೂಸ್‌ಗಳೂ, ಬಣ್ಣ ಬಣ್ಣದ ಕಾಲುಚೀಲಗಳೂ, ಶಾಲುಗಳೂ, ವೆಸ್ಟ್‌ಕೋಟುಗಳು ...... ಆಮೇಲೆ ಚಿನ್ನದ ಸರಪಣಿ ಇರೋ ಗಡಿಯಾರ .. ....ಹಂ .......ಹೀಗೆ ನನಗೆ ಬೇಕಾದ್ದೆಲ್ಲಾ ತರುತೀತಾನೆ ?

ಗುರುಪಾದ :—ತರುತೀನಪ್ಪ !

ಭೀಮಸೇನ :—ಮಗೂ ! ನಾನು ಮಗ್ಗಲು ಮನೆ ರಂಗಣ್ಣನ ಹತ್ತಿರ ಹೋಗಿ ಈ ಹೊಸ ಷರ್ಟು, ಷೂಸ್ ತೋರಿಸಿ ಬಿಟ್ಟು ಬರುತೀನಿ (ಹೊರಡಲಿರುವನು)

ಗುರುಪಾದ :—ಅಪ್ಪಾ ! ಅವರಮನೇಲಿ ಇವತ್ತು ಏನೋ ಹಬ್ಬ ಇರಬಹುದು. ಯಾರುಯಾರೋ ಓಡಾಡುತ್ತಿದ್ದರು. ರಂಗಣ್ಣೋರು ಕೂಡ ಮಗುಟ ಉಟ್ಟುಕೊಂಡು, ಮೊಟ್ಟೆ ಕಾಯಿ ಜುಂಗು ಬಿಡಿಸುತ್ತಿದ್ದರು ವರಾಂಡಾದಲ್ಲಿ. ನಾನೀಗ ಬರುತ್ತಾ ನೋಡಿದೆ.

ಭೀಮಸೇನ :—ಇರಲೇಳು ಮಗು ! ಅದಕ್ಕೇನಂತೆ !

ಗುರುಪಾದ :—(ಸಂಕೋಚದಿಂದ) ಅಲ್ಲಾಪ್ಪಾ !........ಇನ್ನೂ ಯಾರ್ಯಾರೋ ಬಂದಿದಾರೆ ಅವರ ಮನೆಗೆ. ಬೇಕಾದರೆ ಮಧ್ಯಾಹ್ನದಮೇಲೆ ಹೋಗಿ........

ಭೀಮಸೇನ :—ಅದೇನು ಪರ್ವಾಯಿಲ್ಲ ಮಗು, ಅಲ್ಲದೆ ರಂಗಣ್ಣನಿಗೆ ಒಂದು ತುರ್ತಾದ ಸುದ್ದಿ ಬೇರೆ ಹೇಳಬೇಕಾಗಿತ್ತು. ಅವನ ಜಮೀನಿಗೆ ಸಂಬಂಧಪಟ್ಟಿದ್ದು. ಜೊತೆಗೆ ಇವನ್ನೂ ತೋರಿಸಿದ ಹಾಗಾಯಿತು. ಈಗ ಬಂದುಬಿಡುತೀನಿ. ನೀನೇಳು ; ಮಡಿ ಉಟ್ಟುಕೋ ನಿನ್ನ ಭಾವವ್ಯೆದ ಬರೋ ವೇಳೆಗೆ.

[ಷರ್ಟನ್ನು ನೋಡಿಕೊಂಡು ಗುಂಡಿಯನ್ನು ಸರಿಪಡಿಸಿಕೊಳ್ಳುತ್ತಾ ನಿಷ್ಕ್ರಮಿಸುವನು.]

ಗುರುಪಾದ :—(ಅತ್ತಕಡೆಯೇ ನೋಡಿ ನಿಟ್ಟುಸಿರುಬಿಟ್ಟು) ಅಪ್ಪ ! ....ನೀನು ನಿಜವಾಗಿಯೂ ಬೇಬಿ...... ನಿನ್ನನ್ನು ಇತರರ ಕೈಬಾಯಿಗೆ ಸಿಕ್ಕಿಸದಂತೆ, ಕಾಪಾಡೋದೇ ನನಗೆ ಈ ಜನ್ಮದ ಗುರಿ........ಎರಡು ವರ್ಷಗಳ ಕಾಲ ನಿನ್ನನ್ನು ಬಿಟ್ಟು ... ....ಈ ಕುಹಕದ ಕುಜನರ ಮಧ್ಯೆ....ಅಷ್ಟು ದೂರ ದೇಶಕ್ಕೆ ಹೋಗಿ ಹೇಗಿರುತ್ತೇನೋ !........

[ಹಿಂದಿನಿಂದ ಜಾನಕಮ್ಮನು ಬರುವಳು]

ಜಾನಕಿ :— ಗುರು ! ಏನು ಯೋಚಿಸುತ್ತಾ ನಿಂತುಬಿಟ್ಟೆ ? ಮಡೀಗೆ ಹೊತ್ತಾಗಲಿಲ್ಲವೇ ?

ಗುರುಪಾದ :—ಬಂದೆನಮ್ಮಾ !

ಜಾನಕಿ :—(ಸುತ್ತಲೂ ನೋಡಿ) ಇದೇನು ? ಈಗ ನೀನು ತಂದಿಟ್ಟ ಷರ್ಟು ಷೂಸ್ ಎಲ್ಲಿ ?

ಗುರುಪಾದ :—ಅಪ್ಪ ಹಾಕಿಕೊಂಡು ಹೋದರು.

ಜಾನಕಿ :—(ಅಚ್ಚರಿಯಿಂದ) ಅಪ್ಪಾ ! ?

ಗುರುಪಾದ :—ಹೌದಮ್ಮ. ಹೊಸ ಸಾಮಾನು ಕಂಡರೆ ಅವರಿಗೆಷ್ಟು ಆನಂದವೋ ಹೇಳತೀರದು. "ನಿಮಗೋಸ್ಕರವೇ ಅವನ್ನ ತಂದಿದೀನಿ'' ಅಂದೆ; ಹಿಗ್ಗಿಹೋದರು. ಆಮೇಲೆ ಅವನ್ನು ಹಾಕಿಕೊಂಡು, ಸಂತೋಷಪಟ್ಟು ಮಗ್ಗಲುಮನೆ ರಂಗಣ್ಣೋರಿಗೆ ತೋರಿಸಿ ಬರುತೇನೇಂತ ಹೋದರು.

ಜಾನಕಿ :—(ನುಗ್ಗುವ ಸಿಟ್ಟನ್ನು ತಡೆದು) ಅಲ್ಲಿಗೆ ಹೋಗೋದಕ್ಕೆ ಇದೊಂದು ಒಳ್ಳೇ ನೆಪವಾಯಿತು .......(ನೊಂದು) ದೇವರು ಇವರಿಗೆ ಎಂದಿಗೆ ಬುದ್ಧಿಕೊಡುತಾನೋ ಕಾಣೆ ! ಇಷ್ಟು ವಯಸ್ಸಾದರೂ ಕೂಡ ಈ ಚಪಲಬುದ್ಧಿ, ಈ ತಿರಿಯಾಶೆಗಳೂ........

ಗುರುಪಾದ :—(ಕೈಜೋಡಿಸಿ ತಡೆದು) ಅಮ್ಮಾ ! ಮುಂದೇನೂ ನುಡಿಯಬೇಡ. ಅಪ್ಪನಾತ್ಮ ಇನ್ನೂ ಮಗು- ಮಗುವಿನಂತ ಸ್ಥಿನಲ್ಲೇ ಇದೆ. ಅದು ಇನ್ನುಮುಂದೆ ಜನ್ಮಜನ್ಮಾಂತರಗಳಲ್ಲಿ ಬೆಳೀತಾ ಸಂಸ್ಕಾರವಾಗುತಾ ಬರಬೇಕೇ ಹೊರತು, ದೇಹ

ದೊಂದಿಗೇನೇ ನೆಟ್ಟಗೆ ಬೆಳೆಯೊಲ್ಲ. ದೇಹವೃದ್ಧವಾದ ಮಾತ್ರಕ್ಕೇನು ? ಅಪ್ಪ ಇನ್ನು ಮಗು ! ಅವನ ಪುಣ್ಯದಿಂದ ದೇವರು ನಿನ್ನಂಥ ಹೆಂಡತೀ ಕೈಗೆ ಸಿಗೋಹಾಗೆ ಮಾಡಿದ. ಬೇರೆ ತರಹ ಹೆಂಡತೀರ ಕೈಗೆ ಸಿಕ್ಕಿದ್ದರೆ, ಎಂದೋ ಬೀದಿಗೆಳೆದು ಅವನನ್ನ ಹುಚ್ಚನನ್ನಾಗಿ ಮಾಡಿಬಿಡುತ್ತಿದ್ದರು. ನಿನ್ನ ಜನ್ಮ ಸಾರ್ಥಕವಾಗಿದೆಯಮ್ಮ ! ನೀನು ಅಪ್ಪನ್ನ ಮಗುವಿನಹಾಗೆ ಸಾಕುತ್ತಿದೀಯಲ್ಲಮ್ಮಾ ! ಅಷ್ಟಕ್ಕೇನೆ ದೇವರು ಮೆಚ್ಚಿಕೊಂಡಿದಾನೆ. ಹೀಗಿರೋವಾಗ ನಿನ್ನ ಬಾಯಿಂದ ಅವನ ವಿಚಾರವಾಗಿ ಬಿರುನುಡಿಗಳು ಹೇಗೆ ಬಂದಾವಮ್ಮ !... .... (ತಾಯಿಯ ಕೈಹಿಡಿದು) ನಿನ್ನ ಮನಸ್ಸಿನ ಚಿಂತೆ ನನಗೆ ಗೊತ್ತಮ್ಮ.

ಜಾನಕಿ :– ( ಕಣ್ಣೊರಸಿಕೊಂಡು ಮಗನ ಎರಡು ಕೈಗಳನ್ನು ಹಿಡಿದು) ನನಗೆ ಪ್ರಪಂಚದಲ್ಲೆಲ್ಲಾ ಅವರದೊಂದೇ ಚಿಂತೇ ಮಗೂ ! ಯಾರೆಲ್ಲಿ ಅವರನ್ನ ಹಾಸ್ಯಮಾಡಿ ಅವರ ಮನಸ್ಸನ್ನ ನೋಯಿಸುತಾರೋ ! ಯಾರೆಲ್ಲಿ ಅವರನ್ನ ಗೇಲೀ ಮಾಡೀ ಗೋಳಾಡಿಸುತಾರೋ ಅನ್ನೋದೇ ನನ್ನ ಕನಸು ಮನಸಿನಲ್ಲೂ ತುಂಬಿದೆ. ಗುರೂ ! ನಮ್ಮ ಪುಣ್ಯಕ್ಕೆ ನೀನು ಬುದ್ಧಿವಂತನಾಗಿದ್ದೀ. ಅವರ ಭಾಗ್ಯಕ್ಕೆ, ನಿನಗೆ ಅವರಲ್ಲಿ ಅಪಾರವಾದ ಪ್ರೇಮವಿದೆ....ಹೀಗಿದ್ದಾಗ್ಯೂ ಮಗೂ . .... ಮುಂದೆ ನಾವು ಮಾಡೋ ಸಂಬಂಧದಿಂದ, ಇದುವರೆಗೂ ಗುಟ್ಟಾಗಿದ್ದ ನಮ್ಮ ಸಂಸಾರ ಇನ್ನೆಲ್ಲಿ ಬಯಲಿಗೆ ಬಂದು ಬಿಡುತ್ತೋ ಅನ್ನೋದೊಂದೇ ಚಿಂತೆ ಮಗೂ !....ದೊಡ್ಡ ಕಡೇ ಸಂಬಂಧ ಒದಗಿ, ಲಗ್ನ ನಿಷ್ಕರ್ಷೆಯಾದಾರಭ್ಯ,

ದೇವರಿಗೆ ಪ್ರತಿಕ್ಷಣವೂ ಬೇಡಿಕೊಳ್ಳುತಿರೋದು ಇದೊಂದೇ ಮಗೂ— ನಿಮ್ಮಪ್ಪನ್ನ ದೇವರು ಈ ಹೊಸನೆಂಟರ ಬಾಯಿಗೆ ಸಿಕ್ಕಿಸದ ಹಾಗಿಟ್ಟಿರಲೀಂತ .. ....

ಗುರುಪಾದ :— (ತಾಯಿಯ ಕೈಗಳೆರಡನ್ನೂ ತನ್ನ ಬೊಗಸೆಯಲ್ಲಿಟ್ಟು) ಅಮ್ಮಾ ! ನಿನ್ನ ಪಾದದಾಣೆ ಹೇಳುತೇನೆ—ಅಪ್ಪನ ಪ್ರೇಮಚಿಂತನೆ ಒಂದು ಹೊರತು, ನನ್ನ ಮನಸ್ಸಿನಲ್ಲಿ ಎರಡನೇ ಆಶೆಯ ಸುಳಿವಿದ್ದರೇ, ನನ್ನ ವಿದ್ಯೆ ಭಸ್ಮವಾಗಿ ಹೋಗಲೀ. ಅವರ ಹಣ, ಮೋಟಾರು, ಅಂತಸ್ತು, ನನ್ನ ಇಂಗ್ಲೆಂಡಿಗೆ ಕಳಿಸೋದು ಇವೊಂದೂ ನನಗೆ ದೊಡ್ಡದಾಗಿಲ್ಲವಮ್ಮ. ನಾನು ಈ ಸಂಬಂಧಕ್ಕೊಪ್ಪಿರೋದು ಕೂಡಾ ಅಪ್ಪನಿಷ್ಟವೇ.

[ಹೊರಗಡೆ ಹೆಜ್ಜೆ ಸಪ್ಪಳವಾಗುವುದು]

ಜಾನಕಿ :—ಅವರು ಬಂದರೇನೋ !— (ಒಳಕ್ಕೆ ಹೋಗುವಳು)

ಗುರುಪಾದ :—(ಹೊರಗೆ ಇಣಕಿ ನೋಡಿ) ಓಹೋ ! ಒಳಗೆ ಬನ್ನೀ ಮಿಸ್ಟರ್ ಅಮೃತರಾವ್ !

ಅಮೃತರಾವ್ :—(ಒಳಕ್ಕೆ ಬಂದು ನಿಂತು ಸುತ್ತಲೂ ನೋಡುವನು. ಕೈಲೊಂದು ಒಡೆದ ಲಕೋಟೆ ಇರುವುದು) ನೀವು ಸಂಜೆ ಪಾರ್ಟೀಗೆ ಬರೋದಿಲ್ಲವೇ ?

ಗುರುಪಾದ :—(ಆಶ್ಚರ್ಯದಿಂದ) ಬರದೇ ? ಖಂಡಿತ ಬರುತೇನೆ. ಇದೇನು ಹೀಗೆ ಕೇಳುತೀರಾ ?

ಅಮೃತರಾವ್ :—ಯಾವ ಡ್ರೆಸ್‌ನಲ್ಲೋ ?

ಗುರುಪಾದ :—ಯಾವ ಡ್ರೆಸ್‌ನಲ್ಲೀಂದರೇನು ಮಿಸ್ಟರ್ ಅಮೃತರಾವ್ ?

ಅಮೃತರಾವ್ :—(ಸಿಡಿದು) ನನ್ನ ಜೊತೇಲಿ ಬರಬೇಕಾದರೇ, ನನ್ನೊಂದಿಗೆ ಸ್ವಲ್ಪಾನಾದರೂ ಎಲ್. ಸಿ. ಎಂ. ಇರಬೇಕೂ –ಅಟ್ ಲೀಸ್ಟ್ ಡ್ರೆಸ್ಸಿನಲ್ಲಾದರೂ !

ಗುರುಪಾದ :—(ಅಚ್ಚರಿ ಸಂತಾಪಗಳಿಂದ) ನಿಮ್ಮ ಮಾತು ನನ ಗರ್ಥವಾಗಲಿಲ್ಲ.

ಅಮೃತರಾವ್ :—ಕಷ್ಟ ... (ಸಿಡಿದು) ನಾವು ಸ್ವಲ್ಪಹೊತ್ತಿಗೆ ಮುಂಚೆ ತಂದ ಸಿಲ್ಕ್ ಷರ್ಟ್, ಷೂಸ್ ಸಾಕ್ಸ್‌ಗಳನ ನಿಮ್ಮ ತಂದೆ ಹಾಕಿಕೊಂಡು ಅಂಗಡೀಬೀದಿ ಉದ್ದಕ್ಕೂ ಎಲ್ಲರಿಗೂ ತೋರಿಸುತಾ "ನನಗೋಸ್ಕರಾ ನನ್ನ ಮಗ ತಂದದ್ದೂ"ಂತಾ ಸಾರುತಾ ಹೋಗುತಿದಾರೆ ! .......

ಗುರುಪಾದ :—ನನಗೂ ನನ್ನ ತಂದೇಗೂ ಭೇದ ಎಣಿಸಿದರೆ ನನಗಿಂತ ಪಾಪಿ ಮತ್ತ್ಯಾರಾಗುತಾರೆ ಮಿಸ್ಟರ್ ಅಮೃತ ರಾವ್ ?

ಅಮೃತರಾವ್ :—(ಸಿಟ್ಟಾಗಿ) ಈಗ ನನ್ನ ತಂಗೀನ ಮದುವೆ ಯಾಗೋರು ನೀವೋ, ಇಲ್ಲಾ ನಿಮ್ಮ ಆ ಸ್ಟುಪಿಡ್........

ಗುರುಪಾದ :—(ಮುಂದೆ ನುಗ್ಗಿ ಅಮೃತರಾಯನ ಬಾಯಮೇಲೆ ಕೈಯಿಟ್ಟು) ಅಮೃತರಾವ್ ! ದಯಮಾಡಿ ಆ ಮಾತನ್ನ ಹಿಂದಕ್ಕೆ ತಗೊಳ್ಳಿ. ನೀವು ತಪ್ಪುದಾರೀಲಿ ಹೋಗುತಿ ದೀರಿ, ಪ್ಲೀಸ್ .... (ಸದ್ದು ಕೇಳಿ ಜಾನಕಮ್ಮನು ಬಂದು ನಿಲ್ಲುವಳು.)

ಅಮೃತರಾವ್ :—(ಸಿಟ್ಟಾಗಿ ಕೊಡವಿಕೊಂಡು) ಐ ಆಮ್ ನಾಟ್ ಹಿಯರ್ ಟು ಪ್ಲೀಸ್ ದೀಸ್ ಬ್ರೈನ್‌ಲೆಸ್ ಹ್ಯಾಗ್ಸ್.

ಕೇಳಿ ಗುರುಪಾದ್—ನನ್ನ ತಂಗೀನ ತಗೊಂಡು ಬಂದು ನಿಮ್ಮ ಮುಖ ನೋಡಿ ಈ ಮನೇಗೆ ಕೊಟ್ಟು, ನಿಮ್ಮ ಪಾವರ್ಟಿ ಸ್ಟ್ರಿಕನ್ ಫ್ಯಾಮಲೀಗೆ ಹೆಲ್ಪ್ ಮಾಡೋಣಾಂತ ನಾನು ದೊಡ್ಡದಾಗಿ ಯೋಚಿಸಿ, ಏರ್ಪಾಟು ಮಾಡುತಿದ್ದರೇ... ....

[ಹೊರಗಡೆಯಿಂದ "ಜಾನಕ್ ! ಜಾನ್ ! ರಂಗಣ್ಣ ನನ್ನ ಊಟಕ್ಕೆ ಬರಹೇಳಿದಾನೇ ! !" ಎಂದು ಕೂಗುತ್ತಾ ಭೀಮಸೇನರಾಯನು ಪ್ರವೇಶಿಸುವನು.]

ಅಮೃತರಾವ್ :—ನಿಮ್ಮಾ ಫೂಲ್ ಆಫ್ ಎ ಫಾದರ್... ....

[ಗುರುಪಾದನು ಸಿಟ್ಟಾಗಿ ಅಮೃತರಾಯನ ಕಪಾಳಕ್ಕೆ ಫಟೀರನೆ ಹೊಡೆಯುವನು. ಜಾನಕಮ್ಮ ಮುಂದೆ ಧಾವಿಸಿ ಬಂದು ಮಗನನ್ನು ತಡೆಯುವಳು. ಅಮೃತರಾಯನು ಕಿಡಿಯಾಗಿ ಕೈಲಿದ್ದ ಲಕೋಟೆಯನ್ನು ಗುರುಪಾದನ ಮುಂದೆ ನೆಲಕ್ಕಪ್ಪಳಿಸಿ, ಕೆನ್ನೆಗೆ ಕೈಯಿಟ್ಟುಕೊಂಡು, ಸರಸರನೆ ಹೊರಕ್ಕೆ ಹೊರಟು ಹೋಗುವನು]

ಗುರುಪಾದ :—(ಕಾಗದವನ್ನು ಕೈಗೆ ತೆಗೆದುಕೊಂಡು ಸಿಧಾನವಾಗಿ ಓದುವನು.) ಐ ಹ್ಯಾವ್ ಲರ್ಂಟ್ ಫ್ರಮ್ ರಿಲೈಯುಬಲ್ ಸೋರ್ಸಸ್ ದಟ್ ದಿ ಬ್ರೈಡ್‌ಗ್ರೂಮ್ಸ್ ಫಾದರ್ ಈಸ್ ಅನ್ ಈಡಿಯಾಟಿಕ್ ಸ್ಟುಪಿಡ್ ಫೂಲ್....ಮ್ಯಾರೇಜ್ ಈಸ್ ಕ್ಯಾನ್ಸಲ್ಡ್. ಯು ಸ್ಟಾಪ್ ಫರ್ದರ್ ಮೂವ್ಸ್ ಅಂಡ್ ಕಮ್ ಅವೆ ಇಮ್ಮಿಡಿಯೇಟ್ಲಿ. (ರೇಗಿ ಕಾಗದವನ್ನು ಹರಿದು ಚೂರು ಚೂರುಮಾಡಿ ನೆಲಕ್ಕಪ್ಪಳಿಸಿ ತುಳಿಯುವನು) ಪೀಡೇ ಕಳೀತು. ಇದೂ ಗುರುಕೃಪೆಯೇ ಸರಿ.

ಜಾನಕಿ :—(ನೊಂದು) ಗುರುಪಾದ ! ಏನುಕೆಲಸ ಮಾಡಿ ಬಿಟ್ಟೆಯಪ್ಪಾ ದುಡುಕೀ ?

ಗುರುಪಾದ :—ಒಳ್ಳೇದೇ ಆಯಿತು ಬಿಡಮ್ಮಾ. ನನ್ನನ್ನ ಹೆತ್ತು, ಹೊತ್ತು, ಸಾಕೀ, ದೊಡ್ಡೋನ ಮಾಡಿದ ತಾಯಿ ತಂದೆಗಳ ವಿಚಾರದಲ್ಲಿ ಗೌರವವಿಲ್ಲದ ಈ ಧನಾಂಧರ ಮನೇ ಹುಡುಗೀನ ಕಟ್ಟಿಕೊಳ್ಳೋ ಪಾತಕ ದೂರವಾಯಿತು ಗುರು ವಿನ ದಯದಿಂದ.

ಜಾನಕಿ :—ಭಾವಮೈದುನನಾಗೋ ಹುಡುಗ ಮನೆಗೆ ಬಂದಿದ್ದರೇ, ಅವನನ್ನ ಕೆನ್ನೆಗೆ ಹೊಡೆಯೋದೇಪ್ಪಾ ?

ಭೀಮಸೇನ :—( ಮುಂದೆ ಬಂದು ) ನನಗೇನೂ ತೋರದ ಹಾಗಾಗಿದೆ ಜಾನಾ ! (ಗುರುಪಾದನ ಕಡೆಗೆ ತಿರುಗಿ) ಗುರೂ ! ನೀನೇಕೇ ಇಷ್ಟು ಸಿಟ್ಟಾಗಿ ಹುಡುಗತನ ತೋರಿಸಿ ಬಿಟ್ಟೇ ?

ಗುರುಪಾದ :—ಅಪ್ಪಾ ! ನಿನ್ನನ್ನ 'ಫೂಲ್' ಅಂದ ಆಕೋರೀ. ದೇವರೇ ನನ್ನೆದುರಿಗೆ ನಿನ್ನನ್ನ ಹಾಗಂದಿದ್ದರೂ ನಾನು ಹೀಗೇ ಮಾಡುತಿದ್ದೆನೇನೋ.

ಭೀಮಸೇನ :— ಅವನು ನನ್ನನ್ನೇನೋ ಅಂದಾಂತಂದರೆ ಮಗೂ.... ಅವನೆಷ್ಟಾದರೂ ಹುಡುಗ........ದೊಡ್ಡ ಮನುಷ್ಯರ ಮಗ........

ಜಾನಕಿ :—ಮುಂದೆ ನಮ್ಮ ಗತಿಯೇನು ಮಗೂ ?

ಗುರುಪಾದ :—(ಕೈಹಿಡಿದು) ಇದು ಯಾಕಮ್ಮ ಹೀಗೆ ಮಾತನಾಡುತೀ ? ನನ್ನ ಜೀವವಿರೋವರೆಗೆ, ನಿಮ್ಮಿಬ್ಬರ ಯೋಚನೇನ ನನ್ನ ತಲೇಮೇಲೆ ಹಾಕಿಬಿಡಿ. ಆಕಾಶವೇ ಕಳಚಿ ಬಿದ್ದರೂ, ನನ್ನ ತಲೆ ಕೊಟ್ಟು ನಿಲ್ಲುತೇನೆ.

**ಜಾನಕಿ** :—(ಬೊಗಸೆಯಲ್ಲಿ ಮಗನ ಕೈಹಿಡಿದು) ಎಂಥಾ ಸಂಬಂಧ ಏನಾಗಿಬಿಡಿತು ಕ್ಷಣ ಕಾಲದಲ್ಲಿ.

ಗುರುಪಾದ :—ಅಮ್ಮಾ ! ಅಪ್ಪನಿಗಿಂತ, ನಿನಗಿಂತ ಹೆಚ್ಚಿನ ಸಂಬಂಧ ಈ ಜಗತ್ತಿನಲ್ಲಿ ಮತ್ತೆ ಯಾವುದೂ ಇಲ್ಲ. ನಿಮ್ಮ ಸೇವೆಗಿಂತ ಹೆಚ್ಚಿನ ಕರ್ತವ್ಯವೂ ಇಲ್ಲ.

ಭೀಮಸೇನ :— (ಗುರುಪಾದನ ಕೈಹಿಡಿದು) ಮಗೂ ! ನಿನ್ನ ಇಂಗ್ಲೆಂಡಿಗೆ ಕಳಿಸಿ ಓದಿಸೋ ಅಂಥ ಯೋಗ್ಯತೇ ನಮ್ಮ ಪೈಕಿ............

ಗುರುಪಾದ :—ಅಪ್ಪಾ ! ವಿದ್ಯೆ, ಜ್ಞಾನ ಇಂಗ್ಲೆಂಡಿನಲ್ಲಿಲ್ಲಾ ; ಅಮೆರಿಕಾದಲ್ಲಿಲ್ಲ. ತಾಯಿಯ ಪಾದದ ಉಂಗುಷ್ಟದಲ್ಲಿದೆ. ಮುಪ್ಪಿನ ತಂದೆಯ ಸೇವೇಲಿದೇ.

[ಜಾನಕಮ್ಮನು ಮಗನ ಕೈಯನ್ನಪ್ಪಿ ಕಂಬನಿದುಂಬುವಳು. ಭೀಮಸೇನರಾಯನು ಮಗನನ್ನಪ್ಪಿ "ನನ್ನಪ್ಪಾ ! ನನ್ನ ತಂದೇ !" ಎಂದು ಗದ್ಗದಿಸುವನು. ಗುರುಪಾದನು ಸೆಟ್ಟ ದೃಷ್ಟಿಯಲ್ಲಿ ಹರ್ಷಮಗ್ನನಾಗಿರುವನು.]

ಬಿ. ಎಸ್. ಐಯ್ಯಂಗಾರ್ ಪ್ರಿಂಟರ್, ಬೆಂಗಳೂರು ಸಿಟಿ

ಮುಂದೆ ಕ್ರಮವಾಗಿ ಪ್ರಕಟವಾಗಲಿರುವ

**ಚಿ. ಸದಾಶಿವಯ್ಯನವರ ಕೃತಿಗಳು**

| | |
|---|---|
| ಸೊಂಪಿನ ಸಾಗರ | (ನಾಟಕ) |
| ಮಕ್ಕಳೇ ದೇವರು | ,, |
| ಅಮ್ಮ | ,, |
| ಶಿವಾಜಿಯ ಬಾಲ್ಯ | ,, |
| ಸ್ವಾತಂತ್ರ್ಯ ಘರ್ಜನೆ | ,, |
| ರಾಮ ದರ್ಶನ | ,, |
| ಬೃಂದಾವನ | ,, |
| ಸೌಭಾಗ್ಯ | ,, |
| ಕನ್ಯಾಸೆರೆ | ,, |
| ರಹಸ್ಯ | ,, |
| ಮಾಂಗಲ್ಯ | ,, |
| ಶಾಂತಿ | ,, |
| ಜಯಶ್ರೀ | ,, |
| ತಂಗಚ್ಚಿ | ,, |
| ಆಮೇಲೆ | ,, |
| ಏಕನಾಥ | ,, |
| ರಾಜ ಶ್ರೀ | ,, |
| ಬ್ರಾಹ್ಮಣ | ,, |
| ನಿಷೇಧ ಪ್ರಚಾರ | ,, |
| ಸ್ವಾಮಿ ರಾಮತೀರ್ಥ | (ಜೀವನ ಚರಿತ್ರೆ) |
| ಬಿಡುಗಡೆ | (ಕಥಾಸಂಕಲನ) |
| ಸತಿ | (ಕಾದಂಬರಿ) |

ಮೊದಲಾದುವು

